ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ಕೊಳಗೇರಿ ಅಭಿವೃದ್ಧಿ ನಿಗಮದಿಂದ ವಸತಿ ಸೌಲಭ್ಯ ಕುರಿತು

ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

552 (500) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕಾರವಾರ ಜಿಲ್ಲೆಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯಿಂದ ವಸತಿ ನೀಡಲು ಯಾವ ಯಾವ ಯೋಜನೆಗಳಿವೆ ;

(ಆ) ಇದುವರೆಗೆ ಕಾರವಾರ ಜಿಲ್ಲೆಯಲ್ಲಿ ಮಂಡಳಿಯಿಂದ ಎಷ್ಟು ಜನರಿಗೆ ವಸತಿಗಳನ್ನು ಒದಗಿಸಲಾಗಿದೆ ; (ತಾಲ್ಲೂಕುವಾರು/ಜಿಲ್ಲಾವಾರು ಸವಿಸ್ತಾರ ವರದಿ ನೀಡುವುದು)

(ಇ) ಕಾರವಾರ ಜಿಲ್ಲೆಯಲ್ಲಿ ಕೊಳಗೇರಿ ಅಭಿವೃದ್ಧಿ ಮಂಡಳಿಯಿಂದ ವಸತಿಗಾಗಿ ಎಷ್ಟು ಬೇಡಿಕೆ ಇವೆ ; ಈಗಾಗಲೇ ಎಷ್ಟು ಮನವಿಗಳು ಸಾರ್ವಜನಿಕರು ಮತ್ತು ಜನಪ್ರತಿನಿಧಿಗಳಿಂದ ಬಂದಿದೆ ; ಇವರಿಗೆಲ್ಲ ಎಷ್ಟು ದಿವಸಗಳಲ್ಲಿ ವಸತಿ ಒದಗಿಸಲಾಗುವುದು ;

(ಈ) ಕೊಳಗೇರಿ ಅಭಿವೃದ್ಧಿ ಮಂಡಳಿಯಿಂದ ಈಗಾಗಲೇ ನೀಡಿರುವ ಮನೆಗಳಿಗೆ ಮತ್ತೆ ರಿಪೇರಿ ಕಾರ್ಯಕ್ಕೆ ಅನುದಾನ ಮಂಜೂರು ಮಾಡಲಾಗಿದೆಯೇ ; ಹಾಗಿದ್ದಲ್ಲಿ, ಎಷ್ಟು ಮನೆಗಳಿಗೆ ಮತ್ತೆ ಅವಕಾಶ ಕಲ್ಪಿಸಲಾಗಿದೆ ; ವಸತಿಗಳನ್ನು ರಿಪೇರಿ ಮಾಡುವ ಹೊಣೆ ಯಾರದು ; ಎಷ್ಟು ದಿವಸಗಳಲ್ಲಿ ರಿಪೇರಿ ಮಾಡಿಕೊಡಲಾಗುವುದು ? (ತಾಲ್ಲೂಕುವಾರು/ಜಿಲ್ಲಾವಾರು ಸವಿಸ್ತಾರ ವರದಿ ನೀಡುವುದು)